ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ ಪಟ್ಟಿ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ 19ನೇ ಜುಲೈ, 2019

ಬೀದರ್ ಜಿಲ್ಲೆಯ ವಸತಿ ಫಲಾನುಭವಿಗಳ ಬಗ್ಗೆ

ಶ್ರೀ ರಘುನಾಥ್‌ರಾವ್ ಮಲ್ಕಾಪೂರೆ (ವಿಧಾನಸಭೆಯಿಂದ ಚುನಾಯಿತರಾದವರು)-

66 (575) ವಸತಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಕಳೆದ 3 ವರ್ಷಗಳಲ್ಲಿ ಬೀದರ್ ಜಿಲ್ಲೆಯಲ್ಲಿ ವಿವಿಧ ಯೋಜನೆಗಳಡಿ ಆಯ್ಕೆಯಾದ ವಸತಿ ಫಲಾನುಭವಿಗಳ ಸಂಖ್ಯೆ ಎಷ್ಟು ; ಭರಿಸಲಾದ ವೆಚ್ಚ ಎಷ್ಟು ; ಅವುಗಳ ನಿರ್ಮಾಣ ಪ್ರಸ್ತುತ ಯಾವ ಹಂತದಲ್ಲಿದೆ ; (ತಾಲ್ಲೂಕುವಾರು ಮಂಜೂರಾದ ಮಾಹಿತಿ ಒದಗಿಸುವುದು)

(ಆ) ವಿವಿಧ ವಸತಿ ಯೋಜನೆಗಳ ಅಡಿ ಆಯ್ಕೆಗೊಂಡು ಸಕಾಲದಲ್ಲಿ ಮನೆ ನಿರ್ಮಿಸಿಕೊಳ್ಳದ ಫಲಾನುಭವಿಗಳ ಮನೆಗಳು ಬ್ಲಾಕ್ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಅವುಗಳನ್ನು ಪುನರ್ ಪ್ರಾರಂಭ ಮಾಡುವ ಚಿಂತನೆ ಸರ್ಕಾರದ ಮುಂದಿದೆಯೇ ;

(ಇ) ಬೀದರ್ ಜಿಲ್ಲೆಯಲ್ಲಿ ಕಳೆದ 3 ವರ್ಷಗಳಿಂದ 2019ರ ಜೂನ್ 30ರವರೆಗೆ ಬ್ಲಾಕ್ ಆಗಿ ನಂತರ ತೆರವು ಮಾಡಲು ಸದರಿಯವರುಗಳು ಸಲ್ಲಿಸಿರುವ ಪ್ರತಿಯೊಂದು ದಾಖಲೆಗಳನ್ನು ನೀಡುವುದು ;

(ಈ) ಬ್ಲಾಕ್ ಆಗಿರುವ ಮನೆಗಳನ್ನು ಪುನಃ ಪ್ರಾರಂಭ ಮಾಡಲು ಮಧ್ಯವರ್ತಿಗಳು ಫಲಾನುಭವಿಗಳಿಂದ ಹಣ ಪಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಅಂತಹ ಅಧಿಕಾರಿಗಳ ವಿರುದ್ಧ ನಿರ್ದಾಕ್ಷಿಣ್ಯ ಕ್ರಮ ಕೈಗೊಳ್ಳಲಾಗುವುದೇ ; (ವಿವರ ನೀಡುವುದು)

(ಉ) ಲಾಕ್ ಆಗಿರುವ ಮನೆಗಳನ್ನು ಪುನಃ ಪ್ರಾರಂಭ ಮಾಡಲು ಯಾವ್ಯಾವ ದಾಖಲೆಗಳು ಬೇಕಾಗುತ್ತವೆ ; ಯಾವ ಆಧಾರದ ಮೇಲೆ ಲಾಕ್ ತೆರವು ಮಾಡಿಕೊಳ್ಳಲು ಫಲಾನುಭವಿಗಳು ಅರ್ಹರಾಗುತ್ತಾರೆ ? (ಬೀದರ್ ಜಿಲ್ಲೆಯಲ್ಲಿ ಲಾಕ್ ಓಪನ್ ಮಾಡಿರುವ ಫಲಾನುಭವಿಗಳ ಪಟ್ಟಿ ಮತ್ತು ಅವರುಗಳು ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಸಲ್ಲಿಸಿರುವ ಅಧಿಕೃತ ಮಾಹಿತಿಯನ್ನು ನಕಲು ಪ್ರತಿಯೊಂದಿಗೆ ವಿವರ ನೀಡುವುದು)